ಇತರರಿಗೆ ಸಂಸಾರವು. ಮೂರನೆಯ ವರ್ಗದವರು ಸಂಸಾರದಲ್ಲಿಯೇ ಇರುತ್ತಾರೆ. ಅವರಲ್ಲೂ ಕೆಲವರನ್ನು ಮಂತ್ರಮಹೇಶ್ವರರನ್ನಾಗಿಯೂ ಭುವನಪತಿಗಳನ್ನಾಗಿಯೂ ಅಣಿಮಾದಿಸಿದ್ಧಿಯುಳ್ಳವರನ್ನಾಗಿಯೂ ಮಾಡುವರು. ಕೆಲವರನ್ನು ಅನುಗ್ರಹಿಸಿ ಹದಿನೆಂಟು ಮಂತ್ರೇಶ್ವರರನ್ನಾಗಿ ಮಾಡುವನು. ಯಾರು ವಿದ್ಯೇಶ್ವರಾರಾಧನೆಯಿಂದಲೂ ದೀಕ್ಷಾದಿವಿಧಿಯಿಂದಲೂ ಅತ್ಯಂತಪಕ್ವಮಲರಾಗುವರೋ ಅವರು ಮೋಕ್ಷಕ್ಕೆ ಹೋಗುವರು. ಕೇವಲಜ್ಞಾನದಿಂದ ಮಲನಿವೃತ್ತಿಯೂ ಮೋಕ್ಷವೂ ಇಲ್ಲ. ದೀಕ್ಷಾದಿವಿಧಿಗಳಿಂದ ಸಂಪಾದಿಸಲ್ಪಟ್ಟ ಪರಮಶಿವಾನುಗ್ರಹದಿಂದಲೇ ಮೋಕ್ಷವೆಂದು ಸಿದ್ಧಾಂತ.

ಅನಂತಾದಿಗಳೇ ಮಂತ್ರಮಹೇಶ್ವರರೆಂಬ ವಿದ್ಯೇಶ್ವರರು. ಇವರು ಅನಂತ, ಸೂಕ್ಷ್ಮ, ಶಿವೋತ್ತಮ, ಏಕನೇತ್ರ, ಏಕರುದ್ರ, ತ್ರಿಮೂರ್ತಿ, ಶ್ರೀಕಂಠ, ಶಿಖಂಡಿ, ಎಂದು ಎಂಟು ಮಹಾತ್ಮರು; ಈಶ್ವರತತ್ತ್ವನಿವಾಸಿಗಳು. ಸಪ್ತಕೋಟಿ ಮಹಾಮಂತ್ರಪದವು ಸಪ್ತಕೋಟಿ ಜೀವಾತ್ಮರುಗಳ ನಾಮಧೇಯವು; ಸರ್ಗಾದಿಯಲ್ಲಿ ಪರಮಶಿವಾನುಗ್ರಹದಿಂದ ಅಧಿಕಾರವನ್ನು ಹೊಂದಿದವರು. ವಾಚ್ಯವಾಚಕಗಳಿಗೆ ಪ್ರಭೇದದೃಷ್ಟಿಯಿಂದ ಮಹಾಮಂತ್ರಗಳೆಂದು ಅವರಿಗೆ ನಾಮಧೇಯವಾಗಿರುವುದು. ಮನನದಿಂದಲೂ ಧ್ಯಾನದಿಂದಲೂ ತ್ರಾಣವನ್ನೂ ರಕ್ಷಣೆಯನ್ನೂ ಮಾಡುವವರಾದ್ದರಿಂದ ಮಂತ್ರಶಬ್ದವು ಇವರಿಗೆ ವಾಚಕವಾಗಿರುವುದು. ಇವರೇ ಇತರರಿಗೆ ದೀಕ್ಷಾದಿವಿಧಿಗಳಿಂದಲೂ ಪೂಜಾಪುರಸ್ಕಾರಾದಿಗಳಿಂದಲೂ ಪ್ರೀತರಾಗಿ ವಿವಿಧ ಸಿದ್ಧಿಗಳನ್ನು ಅನುಗ್ರಹಿಸುವರು.

ಇವರೇ ಶುದ್ಧಸೃಷ್ಟಿಯಲ್ಲಿ ಅವರಮುಕ್ತಿಯನ್ನು ಹೊಂದಿದವರು. ಇವರು ಪರಮಶಿವಸಾಮ್ಯವೆಂಬ ಪರಮುಕ್ತಿಯನ್ನು ಹೊಂದುವರು. ಆದುದರಿಂದ ಮಂತ್ರೇಶ್ವರರು, ಮಂತ್ರಮಹೇಶ್ವರರು, ಲೋಕಪಾಲಕರು—ಇವರುಗಳೆಲ್ಲ ಅಧಿಕಾರಿಗಳು, ಅವರಮುಕ್ತರು. ಅವರಮುಕ್ತಿ ಮೋಹಕವಲ್ಲ; ಬೋಧಕವಾಗಿ ತತ್ತ್ವಜ್ಞಾನವನ್ನೂ ತೀವ್ರ ವೈರಾಗ್ಯವನ್ನೂ ಉಂಟುಮಾಡಿ ಪರಮುಕ್ತಿಗೆ ಸಾಧಕವಾಗುವುದು.

## ಪರಮಶಿವ

ಪರಮಶಿವನು ಚಿದ್ಘನಸ್ವರೂಪನು. ಸ್ವಲ್ಪವೂ ಮಿಶ್ರವಲ್ಲದ ಶುದ್ಧವಾದ ಜ್ಞಾನಸ್ವರೂಪನು. ಅವನ ಶಕ್ತಿಗಳಾದ ಜ್ಞಾನಕ್ರಿಯೇಚ್ಛಾ ಮೊದಲಾದುವೂ ಚಿದ್ಘನಸ್ವರೂಪವು, ಜಡಸ್ವರೂಪವಲ್ಲ. ಮಾಯಾ, ಮಹಾಮಾಯಾ—ಈ ಎರಡೂ ಪರಿಗ್ರಹಶಕ್ತಿಗಳು, ಜಡಸ್ವರೂಪಗಳು, ಬಾಹ್ಯವಸ್ತುಗಳು. ಶುದ್ಧ

ಸೃಷ್ಟಿಯಲ್ಲಿ ಪರಮಶಿವನು ಸಾಕ್ಷಾತ್ ನಿಮಿತ್ತಕಾರಣನು. ಶಿವತತ್ತ್ವವು ಉಪಾದಾನಕಾರಣ. ಅಶುದ್ಧಸೃಷ್ಟಿಯಲ್ಲಿ ಅನಂತಾದಿಮೂಲಕ ನಿಮಿತ್ತ ಕಾರಣನು. ಮಾಯೆ ಉಪಾದಾನಕಾರಣ. ಶುದ್ಧಸೃಷ್ಟಿಯಲ್ಲಿಯೂ ಭುವನಾದಿ ನಿರ್ಮಾಣವು ಅದರಲ್ಲಿ ವಾಸಮಾಡುವ ವಿದ್ಯೇಶ್ವರರಿಗೆ ಬೈಂದವಶರೀರಪ್ರದಾನ ಮೊದಲಾದುವು ಪರಮಶಿವನ ವ್ಯಾಪಾರಗಳು.

ಶುದ್ಧಾಶುದ್ಧವೆಂಬ ಎರಡು ವಿಧ ಸೃಷ್ಟಿಗಳಲ್ಲೂ ಸೃಷ್ಟಿ, ಸ್ಥಿತಿ, ಸಂಹಾರ, ಅನುಗ್ರಹ, ತಿರೋಭಾವವೆಂದು ಐದುವಿಧ ವ್ಯಾಪಾರಗಳಿರುವುವು. ಸೃಷ್ಟಿ ಸ್ಥಿತಿ ಸಂಹಾರಗಳು ಪ್ರಸಿದ್ಧವಾದುವುಗಳು. ಅನುಗ್ರಹವೆಂದರೆ ಚೇತನರಿಗೆ ಭೋಗ ಮೋಕ್ಷಪ್ರದಾನ ಮಾಡತಕ್ಕದ್ದು. ಅಚೇತನಗಳಿಗೆ ಆಯಾ ವಸ್ತುವಿನ ಸಾಮರ್ಥ್ಯಪ್ರಕಾಶನವೆಂಬ ಪ್ರವೃತ್ತಿಯ ಉತ್ಪಾದನವು. ತಿರೋಭಾವವೆಂದರೆ ಬಂಧ. ಹೀಗಾದರೆ ಭೋಗದಿಂದ ಕರ್ಮಕ್ಷಯಮೂಲಕ ಮೋಕ್ಷಪ್ರಾಪ್ತಿ ಯಾಗುವುದೆಂದು ಸಿದ್ಧಾಂತ.

ಈ ಪರಮಶಿವನಿಗೆ ಮಲ, ಕರ್ಮ, ಮಾಯಾ ಮೊದಲಾದ ಪಾಶಸಂಬಂಧ ವಿಲ್ಲದಿರುವುದರಿಂದ ಪ್ರಾಕೃತಶರೀರಕ್ಕೆ ಅವಕಾಶವಿಲ್ಲ. ಶಾಕ್ತಶರೀರವಿರುವುದು. ಅದು ಈಶಾನ ಮೊದಲಾದ ಪಂಚಮಂತ್ರಗಳಿಂದ, ಪಂಚಾವಯವಕಲ್ಪನೆಯಿಂದ ಮಂತ್ರಮಯಶರೀರವು. ಈಶಾನಮಂತ್ರಕ, ತತ್ಪುರುಷವಕ್ತ್ರ, ಅಘೋರಹೃದಯ, ವಾಮದೇವಗುಹ್ಯ, ಸದ್ಯೋಜಾತಪಾದ ಎಂದು ರಹಸ್ಯವು. ಆದುದರಿಂದ ಅನುಗ್ರಹ, ತಿರೋಭಾವ, ಸೃಷ್ಟಿ, ಸಂಹಾರವೆಂಬ ಕೃತ್ಯಪಂಚಕಕಾರಣವಾದ ಶರೀರವು ಪಂಚಮಂತ್ರವೆಂಬ ಪಂಚಶಕ್ತಿಮಯವು.

ನಿರಾಕಾರನಾದ ಪರಮಶಿವನ ಪೂಜಾಧ್ಯಾನಾದಿಗಳು ಅಶಕ್ಯವಾದುದರಿಂದ ಸಾಧಕಾನುಗ್ರಹಕ್ಕಾಗಿ ದೈವಮನುಷ್ಯಾದ್ಯಾಕಾರಗಳಲ್ಲಿ ಸಾನ್ನಿಧ್ಯವಿಶೇಷದಿಂದ ಅವತಾರಶರೀರಗಳೂ ಅನೇಕವಿರುವುವು.

ಇಂತಹ ಪರಮಶಿವನ ಉಪಾಸನೆಯಿಂದ ವೀತಮಲರಾದ ಪುರುಷರು ಪರಮಶಿವನ ಪರಮಸಾಮ್ಯವೆಂಬ ಮುಕ್ತಿಯನ್ನು ಹೊಂದಿ ಶಾಶ್ವತಶಿವರಾಗಿರು ವರು. ಆದರೆ ಇವರು ಆದಿಮುಕ್ತರು, ಪರಮಶಿವನು ಅನಾದಿಮುಕ್ತನು. ಆದುದ ರಿಂದಲೇ ಪರಮಪದವಿಶೇಷಣವು.

———

## ಪರಿಸಮಾಪ್ತಿ

ಹೀಗೆ ಸಕಲ ಶಾಸ್ತ್ರಗಳೂ ರಾಗಾದಿ ದೋಷನಿವೃತ್ತಿರೂಪ ಶಾಂತಿಯೆಂಬ ಆತ್ಮಸೌಖ್ಯವನ್ನು ಉದ್ದೇಶಿಸಿಯೇ ಹೊರಟಿರುವುವು. ವಿವಿಧ ವೈದ್ಯಶಾಸ್ತ್ರಗಳು ರೋಗಿಗಳ ದೇಶಕಾಲ ಸಂದರ್ಭಾನುಸಾರ ಪಥ್ಯಾನುಪಾನ ಭೇದದಿಂದ ಆರೋಗ್ಯವೆಂಬ ದೇಹಸೌಖ್ಯಕ್ಕಾಗಿಯೇ ಹೊರಟು ಪರಸ್ಪರ ದ್ವೇಷವಿಲ್ಲದೆ ಹೇಗೆ ಆದರಣೀಯಗಳಾಗಿರುವುವೋ, ಹಾಗೆ ದರ್ಶನಶಾಸ್ತ್ರಗಳಲ್ಲೂ ಪರಸ್ಪರ ಅನಾದರಣೆಯಿಲ್ಲದೆ ಯಥೋಚಿತ ಪರಿಗ್ರಹದಿಂದ ಯಾವನ ಮನಸ್ಸು ಶಾಂತವಾಗಿರುತ್ತದೆಯೋ ಅವನೇ ಸಕಲ ಶಾಸ್ತ್ರಜ್ಞನೆಂದು ಮಹಾಭಾರತದಲ್ಲೂ 'ಲಂಕಾವತಾರ'ದಲ್ಲೂ ಸ್ಪಷ್ಟವಾಗಿರುತ್ತದೆ.

ಶಮಾರ್ಥಂ ಸರ್ವ ಶಾಸ್ತ್ರಾಣಿ ವಿಹಿತಾನಿ ಮನೀಷಿಭಿಃ
ಸ ಏವ ಸರ್ವಶಾಸ್ತ್ರಜ್ಞಃ ಯಸ್ಯ ಶಾಂತಂ ಮನಸ್ಸದಾ ||

ವೈದ್ಯಾ ಯಥಾತುರವಶಾತ್ ಕ್ರಿಯಾಭೇದಂ ಪ್ರಕುರ್ವತೇ
ನ ತು ಶಾಸ್ತ್ರಸ್ಯಭೇದೋಸ್ತಿ ದೋಷ ಭೇದಾತ್ತು ಭಿದ್ಯತೇ ||

ಸರ್ವದರ್ಶನ ಸಾರಾಂಶ ವಿಜ್ಞಾನಮಪಿ ಶಾಂತಿಕೃತ್
ಶಾಂತಾಕಾರೋ ದೇವದೇವಃ ವಾಸುದೇವಃ ಪ್ರಸೀದತು ||

ಯತ್ಕರೋಮಿ ಯದಶ್ನಾಮಿ ಯಜ್ಜುಹೋಮಿ ದದಾಮಿ ಯತ್
ಯತ್ತಪಸ್ಯಾಮಿ ಹೇ ಕೃಷ್ಣ ತತ್ಕರೋಮಿ ತ್ವದರ್ಪಣಂ ||

ಇತಿ ಶ್ರೀ ಮಹಾಮಹೋಪಾಧ್ಯಾಯ ಪಂಡಿತರತ್ನ ಸಂಸ್ಥಾನ ಧರ್ಮಾಧಿಕಾರಿ ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯರಿಂದ ಬರೆಯಲ್ಪಟ್ಟ ಹಿಂದೂದರ್ಶನಸಾರ ವೆಂಬ ಪ್ರಬಂಧವು ಸಂಪೂರ್ಣಂ

**ಜಗನ್ಮಂಗಳಂ**